# ಕರ್ನಾಟಕ ವಿಧಾನ ಪರಿಷತ್

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2153

2 ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

3 ಉತ್ತರಿಸುವ ದಿನಾಂಕ : 25-03-2021

4 ಉತ್ತರಿಸುವ ಸಚಿವರು : ಗೃಹ ಸಚಿವರು

| ಪ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಐ.ಎಂ.ಎ., ಹಗರಣದಲ್ಲಿ ಐ.ಪಿ.ಎಸ್., ಅಧಿಕಾರಿಗಳು ಸೇರಿದಂತೆ ಹಲವಾರು ಅಧಿಕಾರಿಗಳು ಲಂಚ ಪಡೆದಿರುವುದಾಗಿ ಸಿ.ಬಿ.ಐ., ಚಾರ್ಜ್‌ಶೀಟ್‌ನಲ್ಲಿ ದಾಖಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ರೀತಿಯಾಗಿ ಅಧಿಕಾರಿಗಳು ಪಡೆದಿರುವ ಲಂಚದ ಹಣವು ಬಡ ಹೂಡಿಕೆದಾರರ ಹಣವಾಗಿರುವ ಕಾರಣ ಲಂಚ ಪಡೆದ ಅಧಿಕಾರಿಗಳ ಎಲ್ಲಾ ಸ್ಥಿರ ಮತ್ತು ಚರ ಆಸ್ತಿಗಳನ್ನು ಸರ್ಕಾರ ವಶಕ್ಕೆ ಪಡೆದು ಹೂಡಿಕೆದಾರರಿಗೆ ಹಿಂತಿರುಗಿಸುವ ಕುರಿತು ಸರ್ಕಾರದ ನಿಲುವೇನು; | ಐ-ಮಾನಿಟರಿ ಅಡ್ವೈಸರಿ (ಐ.ಎಮ್.ಎ.), ಬೆಂಗಳೂರು ಮತ್ತು ಇದರ ಸಮೂಹದ ಸಂಸ್ಥೆಗಳಲ್ಲಿ ಆದ ಅವ್ಯವಹಾರಗಳ ಕುರಿತಂತೆ ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 8 ಪಿಸಿಆರ್ 2019 ದಿನಾಂಕ 19.08.2019ರಲ್ಲಿ ಸಿಬಿಐ ತನಿಖೆಗೆ ವಹಿಸಿ ಆದೇಶಿಸಲಾಗಿರುತ್ತದೆ.<br><br>ಹಾಲಿ ಐ.ಎಂ.ಎ ಹಗರಣದ ತನಿಖೆಯನ್ನು ಸಿ.ಬಿ.ಐ. ರವರು ಕೈಗೊಂಡಿದ್ದು ಸಿ.ಬಿ.ಐ. ವತಿಯಿಂದ ವಿಶೇಷ ನ್ಯಾಯಾಲಯಕ್ಕೆ ದಿ: 15-10-2020 ರಂದು ದೋಷಾರೋಪಣಾ ಪಟ್ಟಿ ಸಲ್ಲಿಸಲಾಗಿದ್ದು, ಪ್ರಸ್ತುತ ಪ್ರಕರಣವು ಮಾನ್ಯ ಸಿಬಿಐ ವಿಶೇಷ ನ್ಯಾಯಾಲಯದಲ್ಲಿ ಬಾಕಿ ಇರುತ್ತದೆ. |
| ಆ) | ಲಂಚ ಪಡೆದ ಆರೋಪಿ ಅಧಿಕಾರಿಗಳ ಎಲ್ಲಾ ಸ್ಥಿರ ಆಸ್ತಿಯನ್ನು ಯಾವ ಕಾಲಮಿತಿಯೊಳಗೆ ವಶಪಡಿಸಿಕೊಳ್ಳಲಾಗುವುದು; ಸದರಿ ಅಧಿಕಾರಿಗಳ ಬ್ಯಾಂಕ್ ಖಾತೆಗಳನ್ನು ಸೀಜ್ ಮಾಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | |
| ಇ) | ಪ್ರಸ್ತುತ ಸದರಿ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿರುವುದರಿಂದ ಹೂಡಿಕೆದಾರರ ಮೊತ್ತವನ್ನು ಹಿಂತಿರುಗಿಸಲು ಸದರಿ ಅಧಿಕಾರಿಗಳ ವೇತನದಿಂದ ಕಟಾವಣೆ ಮಾಡಿ ಮಾನ್ಯ ನ್ಯಾಯಾಲಯಕ್ಕೆ ಜಮ ಮಾಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ? | |

ಸಂಖ್ಯೆ: ಒಇ 73 ಪಿಇಜಿ 2021

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು